# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 230

ವಿಧಾನ ಪರಿಷತ್ತು ಸದಸ್ಯರ ಹೆಸರು : ಶ್ರೀ ಘೋಟ್ನೇಕರ ಶ್ರೀಕಾಂತ ಲಕ್ಷ್ಮಣ
(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ : 02.02.2021

ಉತ್ತರಿಸುವ ಸಚಿವರು : ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕಾರವಾರ ಜಿಲ್ಲೆಯ ಜೋಯಿಡಾ ತಾಲ್ಲೂಕಿನ ರೈತರ ಆದಾಯದ ಮೂಲವಾದ ಭತ್ತದ ಖರೀದಿ ಕೇಂದ್ರವು ಇಲ್ಲದೆ ಇರುವುದರಿಂದ ದೂರದ ಹಳಿಯಾಳ ಪಟ್ಟಣದಲ್ಲಿ ಭತ್ತ ಖರೀದಿ ಕೇಂದ್ರಕ್ಕೆ ಹೋಗಲು ಆಗದೆ ಬೆಳೆದ ಭತ್ತಕ್ಕೆ ಬೆಂಬಲ ಬೆಲೆ ಸಿಗದೆ ದಲ್ಲಾಳಿಗಳಿಂದ ರೈತರು ಮೋಸ ಹೋಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು) | ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ರಚಿಸಲಾಗಿರುವ ಜಿಲ್ಲಾಮಟ್ಟದ ಟಾಸ್ಕ್ ಫೋರ್ಸ್ ಸಮಿತಿಯ ಸಭೆಯ ತೀರ್ಮಾನದಂತೆ ಕಾರವಾರ ಜಿಲ್ಲೆಯ ಹಳಿಯಾಳ, ಮುಂಡಗೋಡ, ಶಿರಸಿ ಮತ್ತು ಕುಮುಟಾ ತಾಲ್ಲೂಕುಗಳಲ್ಲಿ ರೈತ ನೋಂದಣಿ ಕೇಂದ್ರ ತೆರೆಯಲಾಗಿರುತ್ತದೆ. |
| ಆ | ಈ ರೀತಿ ಭತ್ತದ ಖರೀದಿ ಕೇಂದ್ರ ಜೋಯಿಡಾದಲ್ಲಿ ಇಲ್ಲದೆ ಇರುವುದರಿಂದ ಸಂಕಷ್ಟದಲ್ಲಿರುವ ರೈತರ ಹಿತ ದೃಷ್ಟಿಯಿಂದ ಸರ್ಕಾರ ಕೂಡಲೇ ಜೋಯಿಡಾದಲ್ಲಿ ಮತ್ತು ರಾಮನಗರದಲ್ಲಿ ಭತ್ತದ ಖರೀದಿ ಕೇಂದ್ರ ಪ್ರಾರಂಭಿಸಲು ಕ್ರಮ ಕೈಗೊಳ್ಳುವುದೇ; ಹಾಗಾದರೆ ಸರ್ಕಾರಕ್ಕೆ ಸದರಿ ಭತ್ತದ ಖರೀದಿ ಕೇಂದ್ರ ಪ್ರಾರಂಭಿಸಲು ಬೇಕಾಗುವ ಕಾಲಾವಕಾಶ ಎಷ್ಟು? (ವಿವರ ನೀಡುವುದು) | ಇದುವರೆಗೆ ಜೋಯಿಡಾ ತಾಲ್ಲೂಕಿಗೆ ಸೇರಿದ ಇಬ್ಬರು ರೈತರು ಭತ್ತವನ್ನು ನೀಡಲು ನೋಂದಣಿ ಮಾಡಿಕೊಂಡಿರುತ್ತಾರೆ. ಹೆಚ್ಚಿನ ಸಂಖ್ಯೆ ರೈತರು ಭತ್ತವನ್ನು ನೀಡಲು ನೋಂದಣಿ ಮಾಡಿಕೊಂಡಲ್ಲಿ, ಅಗತ್ಯ ಅನುಗುಣವಾಗಿ ಜೋಯಿಡಾ ತಾಲ್ಲೂಕಿನಲ್ಲಿ ಖರೀದಿ ಕೇಂದ್ರವನ್ನು ತೆರೆಯಲಾಗುವುದು. |

ಆನಾಸ 10 ಆರ್‌ಪಿಆರ್ 2021 (ಇ-ಆಫೀಸ್)

(ಉಮೇಶ ವಿ. ಕತ್ತಿ)
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.